ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ಎಸ್.ಸಿ.ಪಿ./ಟಿ.ಎಸ್.ಪಿ. ಯೋಜನೆಯ ಅನುದಾನ ಬಳಕೆಯಲ್ಲಿ ಕಳಪೆ ಪ್ರಗತಿಯ ಕುರಿತು

ಶ್ರೀ ಟಿ.ಎ. ಶರವಣ (ವಿಧಾನಸಭೆಯಿಂದ ಚುನಾಯಿತರಾದವರು) -

98 (828) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಹಾಗೂ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಎಸ್.ಸಿ.ಪಿ./ಟಿ.ಎಸ್.ಪಿ. ಯೋಜನೆಯಡಿ 2019-20ನೇ ಸಾಲಿನಲ್ಲಿ ಮೀಸಲಿರಿಸಿದ ಅನುದಾನ ಎಷ್ಟು ; (ಎಸ್.ಸಿ.ಪಿ./ಟಿ.ಎಸ್.ಪಿ. ಯ ಪ್ರತ್ಯೇಕ ವಿವರ ನೀಡುವುದು)

(ಆ) ಸದರಿ ಮೀಸಲಿರಿಸಿದ ಅನುದಾನದಲ್ಲಿ ಪ್ರಸಕ್ತ ಸಾಲಿಗೆ ಬಳಕೆ ಮಾಡಲಾದ ಅನುದಾನದ ಶೇಕಡ ಪ್ರಮಾಣ ಎಷ್ಟು ;

(ಇ) ವರ್ಷಾಂತ್ಯದಲ್ಲಿ ವೆಚ್ಚ ಮಾಡಲಾಗದೇ ಉಳಿಯುವ ಅನುದಾನ ಬಳಕೆಗೆ ಇಲಾಖೆಯು ಕಂಡುಕೊಂಡ ಬದಲಿ ಮಾರ್ಗೋಪಾಯದ ಕ್ರಮಗಳಾವುವು;

(ಈ) ಯಾವ ಯಾವ ಇಲಾಖೆಗಳು ಎಸ್‌ಸಿಪಿ/ಟಿಎಸ್‌ಪಿ ಅನುದಾನ ಬಳಕೆಯಲ್ಲಿ ಕಳಪೆ ಪ್ರಗತಿಯನ್ನು ಸಾಧಿಸಿವೆ ; ಅದಕ್ಕೆ ಕಾರಣಗಳೇನು ;

(ಉ) ಸೂಕ್ತ ನಿರ್ದೇಶನಗಳನ್ನು ನೀಡಿದ್ದಾಗಲೂ ಅನುದಾನ ಬಳಕೆಯಲ್ಲಿ ರಾಜ್ಯವು ಹಿನ್ನಡೆಯನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಕೈಗೊಂಡ ಕಠಿಣ ನಿರ್ಧಾರಗಳೇನು ?